# ಮಾಲಿಕೆ

ಜಿ. ಕೃಷ್ಣಶಾಸ್ತ್ರಿ

ಪ್ರಕಾಶಕರು

ಪಿ. ಟಿ. ಐ. ಬುಕ್ ಡಿಪೊ

ಬೆಂಗಳೂರು ನಗರ

೧೯೩೫

# ಬಿನ್ನಹ

---

ನಮ್ಮ ಮೈಸೂರು ದೇಶದಲ್ಲಿ ಕನ್ನಡ ಭಾಷೆಯಲ್ಲಿ ಅಧ್ಯಾಪಕವೃತ್ತಿ ಶಿಕ್ಷಣಕ್ಕೆ ಮಾರ್ಗದರ್ಶಿಗಳೂ, ವಿದ್ಯಾ ಇಲಾಖೆಯ ಅತ್ಯುನ್ನತ ಪದವಿಯನ್ನಲಂಕರಿಸಿದ್ದು ವಿಶ್ರಾಂತರಾಗಿರುವವರೂ, ನನ್ನ ಶ್ರೇಯಸ್ಕಾಮಿಗಳೂ ಆದ ಶ್ರೀಮಾನ್ ಡಿ. ವೆಂಕಟರಾಮಯ್ಯ, ಬಿ. ಎ., ಎಲ್. ಟಿ. ಯವರಿಗೆ ಭಕ್ತಿ ಪುರಸ್ಸರವಾಗಿ ಈ "ಮಾಲಿಕೆ" ಯನ್ನು ಸಮರ್ಪಿಸಿರುತ್ತೇನೆ.

**ಜಿ. ಕೃಷ್ಣಶಾಸ್ತ್ರಿ**

# ವಿಷಯ ಸೂಚಿಕೆ

# ಮಾಲಿಕೆ

---

## ರೈತನ ಸುಗ್ಗಿ

ಸುಗ್ಗಿ ಸೂರೆ ಸಮಯ ವಿದಿಗೊ
ನುಗ್ಗಿನುಗ್ಗಿ ಬರುವುದು
ಅಗ್ಗ! ಅಗ್ಗ! ಅಗ್ಗ! ಎನುತ
ಜನರ ನುಡಿಸುತಿರುವುದು

ಒಕ್ಕಲಿಗರು ಕಣಗಳಲ್ಲಿ
ಕಾಳನೊಕ್ಕುತಿರುವರು
ಮಕ್ಕಳೆಲ್ಲ ಮುದದೊಳಲ್ಲಿ
ಆಡಿಪಾಡಿ ಕುಣಿವರು

ಕಲ್ಲನುರುಳಿಸಲ್ಕೆ ಹುಲ್ಲು
ಕಾಳು ಬೇರೆಯಪ್ಪುವು
ಮೆಲ್ಲನಡಿಯಿಡುತಲಿ ಪಶುಗ
ಳೆಲ್ಲ ಮೇಯುತಿರ್ಪುವು

ಮಡದಿ ತಂದ ತಂಗುಳುಂಡು
ಪವಡಿಸೆದ್ದು ಗೌಡನು
ಎಡೆಬಿಡದೆಯೆ ಕಾಳ ಬಡಿವ
ಕತ್ತನೆತ್ತಿ ನೋಡನು

ಹಕ್ಕಿಯೆಲ್ಲ ಕುಕ್ಕಿ ತೆನೆಯ
ಕಾಳಮೇಯುತಿರುವುದು
ಬಿಕ್ಕೆ ಬೇಳ್ವ ಜನವದೆಲ್ಲ
ಹಿಗ್ಗಿಹಿಗ್ಗಿ ಕುಣಿವುದು

ಬಿಸಿಯ ಬೆಲ್ಲ ಹಸಿಯ ಕಬ್ಬು
ಹಸುಳೆಯರಿಗೆ ರುಚಿಪುದು
ಹಸಿಯುವರೆಯು ಹೊಸ ಕಡಲೆಯ
ಕಾಳತಿಂದು ಸುಖಿಪುದು

ಸಾಲವೆಂಬ ಶೂಲಕೇರಿ
ನರಳುತಿರುವ ರೈತನು

ಜೋಲು ಮೊಗದಿ ಬೆಂದುಬಾಡಿ
ಆಡನೊಂದು ಮಾತನು

ಸಾಹುಕಾರ ಬಂದು ಧಾನ್ಯ
ಮಾನ್ಯ ಮಾಡಿಕೊಂಡನು
ಸಾಹಸಿಗನು ಶಾನುಭೋಗ
ದೊರೆಯ ಹಣಕೆ ಹಿಡಿದನು

ಕಣಜ ತುಂಬಿ ಮನೆಯ ತುಂಬಿ
ಹೊಟ್ಟೆ ತುಂಬಿ ಎಲ್ಲರ
ತಣಿಪುದೆಂದು ಬಗೆದ ಬಯಕೆ
ವಿಫಲವಾಯಿತೆಲ್ಲವೂ

ರೈತ ಸಕಲ ಜನಕೆ ಜೀವ
ದಾತನವನೆ ಸೋತನು
ಈತನಿಂತು ನೋಯಲೆಂ
ದದೇನು ತಪವಗೈದನೋ

# ಹಾದಿ

ಇದ್ದೆಡೆ ಇದ್ದೇ ಬರುವ ಹೋಹರ
ಕರೆಯುತ ಕಳುಹುತ ನಾನಿರುವೆ
ಒದೆದು ನನ್ನ ಜನ ದನಕರು ಕುರಿಗಳು
ಕುದುರೆ ಕತ್ತೆಗಳು ಚರಿಸುವುವು

ಎಚ್ಚರವಿಲ್ಲದೆ ಎಡವಿ ನಡೆದರೆ
ಬಿದ್ದು ನನಗೆ ವಂದಿಪರವರು
ಹೆಚ್ಚಿನ ಓಟದಿ ಇಬ್ಬರು ಸಂಧಿಸೆ
ಡಿಕ್ಕಿಯಪಾಯವ ಪಡೆಯುವರು

ಬಂಡಿ ಬೈಸಿಕಲ್ ಮೋಟಾರುಗಳು
ನನ್ನ ಮೇಲೆ ಹರಿದಾಡುವುವು
ಕಂಡಿರೆನ್ನ ಈ ಮಹಿಮೆಯ ನೀವು
ನನ್ನ ಕಾಣದವರೇ ಇಲ್ಲ

ಜನಕೆ ಜೀವನವ ನಡೆಸುವ ನಾನೇ
ನಾನಿಲ್ಲದೊಡೀ ಜಗಮಿಲ್ಲ

ಮನೆಮಂಟಪ ಮರ ಮೈಲಿಕಲ್ಲುಗಳು
ನನ್ನ ಪಕ್ಕದೊಳೆ ನಿಂತಿಹವು

ಬಡವ ಬಲ್ಲಿದರು ಕುಂಟ ಕುರೂಪಿಗ
ಳೆಂಬ ಭೇದ ನನಗೇನಿಲ್ಲ
ಒಡೆಯನೊಬ್ಬನೇ ರಾಜನು ನನಗೆ
ಹಕ್ಕು ಮಿಕ್ಕವರಿಗೇನಿಲ್ಲ

ಹಳ್ಳಿಯೂರು ಬಲು ಚೆಲುವಿನ ನಗರಗ
ಳೊಂದುಗೂಡಿಸುವ ನಾನಲ್ತೆ
ಕಲ್ಲು ಮಣ್ಣೆ ನನ್ನೂಟವು ಆದರು
ನಿಮ್ಮನಿಂತು ನಾ ಸಲಹುವೆನು

ಬಂದರೆ ಬನ್ನಿರಿ ಬಿಟ್ಟರೆ ಬಿಡಿರಿ
ನಾನು ಸರ್ವದಾ ಕಾದಿರುವೆ
ಎಂದೆಂದಿಗು ನಾ ಶಾಶ್ವತ ಜಗದೊಳು
ಜನಗಳ ಸಂತತಿ ಇರುವನಕ

# ಹೊಳೆ

ಗುಳುಗುಳು ಗುಳುಗುಳು ಎನುತ ಹರಿಯುವೆ
ಜೊಳಜೊಳ ಸುರಿಯುತ್ತ
ಥಳ ಥಳ ಥಳ ಥಳ ಎನುತ ಹೊಳೆಯುವೆ
ಹೊಳೆ ಹೊಳೆ ಹೊಳೆ ಹೊಳೆ ಎನಿಸುತ್ತ

ಬೆಟ್ಟದ ಬಳಿಯೊಳು ಹುಟ್ಟುವೆ ನಾನು
ಕಟ್ಟ ಕಡೆಗೆ ಸೇರುವೆ ಕಡಲ
ನಟ್ಟ ನಡುವೆ ಮರಗಿಡಗಾಡುಗಳ
ಪಟ್ಟಣ ಹಳ್ಳಿಗಳೆಡೆಯೋಡಿ

ಎಡಬಲದಲಿ ಬಲು ಸಡಗರದಿಂದಲಿ
ನಡೆದು ಬರುವ ಒಡನಾಡಿಗಳ
ಬಿಡದೆ ಕೂಡಿಕೊಂಡುಬ್ಬುವೆ ನುಗ್ಗುವೆ
ಪಡೆವೆ ಘನತೆಯನು ಜಗದೊಳಗೆ

ಕಾಲುವೆ ಕೆರೆಗಳೊಳೋಡುತ ನಾನು
ಶಾಲಿ ಕಬ್ಬುಗಳ ಸಲಹುವೆನು
ಹಾಲುಹಕ್ಕಿ ಬಕ ಗರುಡ ನನ್ನಯು
ಮೇಲೆ ಮೇಲೆ ಸುಳಿದಾಡುವುವು

ಭಾರಿ ನಾವೆ ಹರಿಗೋಲು ದೋಣಿಗಳು
ನೀರಿನಾಳ ಬಲವಾಗಿರಲು
ಬೀರುತ ಜನರಿಗೆ ನೋಟಪ ಸುಗ್ಗಿಯು
ಪಾರಿ ಪಾರಿ ಓಡಾಡುವುವು

ಬೆಂದು ಬಿಸಿಲಿನಲಿ ನೀರ ಕುಡಿದು ಪಶು
ಬೃಂದ ನನ್ನ ಮರಳೆಡೆಯಲ್ಲಿ
ಸುಂದರ ವೃಕ್ಷಗಳಡಿಯೊಳು ಮಲಗುತ
ಚಂದ ತೋರುವುವು ಮೆಲುಕುತ್ತ

ನನ್ನೆಡಬಲದೊಳು ಪುಣ್ಯಾಶ್ರಮಗಳು
ನನ್ನೊಳು ಮೀನುಗಳೇಡಿಗಳು

ನನ್ನೊಳು ಮಿಂದರು ಪರಮ ಪವಿತ್ರರು
ನನ್ನ ನೀರು ಬಲು ಶುಚಿ ರುಚಿಯು

ನಾ ಹರಿವೆಡೆಗಳು ಯಾತ್ರಾಸ್ಥಳಗಳು
ಸಾಹಸಿ ನನ್ನೊಳಗೀಜುವನು
ಸ್ನೇಹದಿ ನನ್ನಯ ಭಾಗ್ಯವ ಪರಿಕಿಸಿ
ಮೋಹಗೊಳ್ಳದವರಾರುಂಟು

ಕೊಳೆಯೆಲ್ಲವ ನಾ ಮುಂದಕೆ ಸಾಗಿಸಿ
ತೊಳೆದು ಉಡುಪುಗಳ ಮಡಿಗೈವೆ
ಮಳೆಗಾಲದಿ ಬಲು ಮೊರೆತ ಸೆಳೆತಗಳು
ತಿಳಿಯದೆ ಜನ ಸಾಯುವುದುಂಟು

ಧುಮುಕುವ ಕಡೆಯೊಳು ನನ್ನನು ತಡೆಯುತ
ತಮಗನುಕೂಲದ ಯಂತ್ರಗಳ
ಸಮನಿಸಿ ಮಿಂಚಿನ ಶಕ್ತಿಯ ಕಲ್ಪಿಸಿ
ಸಮಸ್ತ ಕಾರ್ಯಗಳಾಗಿಪರು

ಬೇಸಗೆಯೊಳು ತುಸು ಜಲ ಕುಂದಿದರೂ
ಮೋಸಮಾಡೆನಾರಿಗು ನಾನು
ಕ್ಲೇಶವಿಲ್ಲದೆಯೆ ಜೀವಜಂತುಗಳ
ಆಸೆಗಳೆಲ್ಲವ ಸಲಿಸುವೆನು

ಭೂಮಿಗೆ ತೊಡಿಸಿದ ಮುತ್ತಿನ ಸರಗಳೊ
ವ್ಯೋಮಗಂಗೆಯ ತನುಜೆಯರೊ
ಸ್ವಾಮಿಯ ಕರುಣಾ ಲಹರಿಗಳೋ ಎನೆ
ನಮ್ಮವರನು ಕವಿ ಬಣ್ಣಿಪನು

# ಬೆಟ್ಟ

ಬೆಟ್ಟವೆಂದು ನನ್ನ ಹೆಸರು ‖ ಪ ‖
ಭೂಭಾರದ ಪಟ್ಟವೆಲ್ಲ ನನ್ನವಲ್ಲವೆ ‖ ಅ. ಪ. ‖

ಬೆಟ್ಟವೆಂದು ನನ್ನ ಹೆಸರು
ತುಟ್ಟತುದಿಯ ನನ್ನ ಶಿಖರ
ಎಷ್ಟೆಷ್ಟು ಎತ್ತರವೊ
ಅಷ್ಟಷ್ಟು ಶ್ರೇಷ್ಠ ನಾನು

ಏನೇನು ಸುಲಭವಲ್ಲ ನನ್ನಯ ಕಾರ್ಯ
ಇನ್ನಾವ ಮಾಡಬಲ್ಲ?
ಬೆನ್ನಮೂಳೆಯಂತೆ ಮಹಿಯ
ಚೆನ್ನಾಗಿ ಹಿಡಿದು ನಾನು
ಮನ್ನಿಸುತ್ತ ಮುಗಿಲ ಸೆಳೆದು
ಹೊನ್ನಿನಂಥ ಮಳೆಯ ಸುರಿಪೆ

ಗಂಡುಗಲಿಯು ಗಾಳಿಗಾದರೂ ನಾ ಸೋಲದೆ
ಗಂಡನಾಗಿ ನಿಲ್ಲಬಲ್ಲೆನು
ಚಂಡ ಪ್ರಚಂಡ ಕಲ್ಲು
ಬಂಡೆ ಗುಂಡು ಕಮರಿ ಗವಿಯು
ಕಂಡುಕಂಡು ಜನರ ತಂಡ
ಕೊಂಡಾಡುವುದು ನನ್ನ

ಕಲ್ಲುಮುಳ್ಳು ಕಾಡುಮೇಡು ಎಲ್ಲಾದರು
ಒಳ್ಳೇ ದಾರಿ ಇಲ್ಲ ಇಲ್ಲವು
ಹುಲಿ ಕರಡಿಗಳೂ ಆನೆ ಹಂದಿ
ಮೊಲ ತೋಳಗಳೂ ಜಿಂಕೆ ಕಡವೆ
ಚೆಲುವಿನ ನವಿಲೂ ಗಿಳಿ ಗೊರವೆಗಳೂ
ಹಲವು ಪ್ರಾಣಿ ಪುಂಜವುಂಟು

ಕತ್ತನೆತ್ತಿ ಎಷ್ಟೇ ನೋಡಿರಿ ಅದಾರೂ
ನೆತ್ತಿಯನ್ನು ಕಾಣಲಾಗದ

ಅತ್ತಿ ತೇಗ ಆಲ ಬೇಲ
ಮತ್ತಿ ಹೊನ್ನೆ ಬಿದಿರು ಬೀಟೆ
ಸುತ್ತೂ ನನ್ನ ಬುಡದೊಳಿಹವು
ಒತ್ತೊತ್ತು ಪೊದೆಯ ನಡುವೆ

ನಿಲ್ಲಿ ಮೇಲೆ ಕೆಳಗೆ ನೋಡಿರಿ ಉಲ್ಲಾಸದಿ
ಹುಲ್ಲುಹಸಲೆಯನ್ನು ಕಾಂಬಿರಿ
ಅಲ್ಲಲ್ಲಿ ದೊಣೆಗಳುಂಟು
ಎಲ್ಲೆಲ್ಲು ಝುರಿಗಳುಂಟು
ಎಲ್ಲೊ ದೂರದಲ್ಲಿರುವ
ರೆಲ್ಲಾ ನೋಡಬಲ್ಲರೆನ್ನ

ಮೇಲೆ ನಿಂತು ದೂರ ನೋಡಿರಿ ನೀಲಾಂಬುಧಿ
ಮಾಲಿನ್ಯವನ್ನು ಕಾಂಬಿರಿ
ನೀಲಿ ಬಣ್ಣಗೂಡಿ ತಲೆಯ
ಮೇಲೆ ಗಗನವೆತ್ತುವಂತೆ

ಏಳೂ ಹರಿದಾರಿಗೆಲ್ಲ
ಆಳೆತ್ತರವೆ ಕಾಂಬೆ

ಹಣ್ಣು ಹೂವು ಗೆಡ್ಡೆ ಗೆಣಸು ನನ್ನಲ್ಲಿವೆ
ಮಾನ್ಯವಾದ ಮೂಲಿಕೆಗಳು
ನನ್ನಮೇಲೆ ನಿಂತು ನೋಡೆ
ಕನ್ನಡಿಯ ತೆರದಿ ಕೆರೆಯು
ಸಣ್ಣ ದಾರದಂತೆ ದಾರಿ
ಕಣ್ಣಿಗೆ ತೋರುತ್ತಲಿದೆ

ಬೇಟೆಗಾರ ಶೂರರೆಲ್ಲರೂ ಏಟಿಕ್ಕುತ
ಕೂಟ ಕೂಡಿ ಮೃಗವ ಕೊಲ್ವರು
ಮಾಟುಗಾರರೆಲ್ಲ ಸಂದು
ನೋಟಕೆಂದು ಮೇಲೆ ಬಂದು
ಊಟ ಉಂಡು ದಣಿದು ಕುಣಿದು
ಸಾಟಿ ನನಗಿಲ್ಲವೆಂಬ

ನೀವು ನನ್ನ ಶಿಖರದಲ್ಲಿಯೆ ಲಾವಣ್ಯದ
ದೇವಮಂದಿರವ ನೋಳ್ಪಿರಿ
ಯಾವ ಯಾವ ದೇಶದವರೊ
ನಾವು ನಾವು ಎಂದು ನುಗ್ಗಿ
ತಾವೆ ಮುಖ್ಯ ಭಕ್ತರೆಂದು
ದೇವರನ್ನು ನೋಡಲಿಹರು

ಕೆರೆಕಟ್ಟೆಗಳ ಕಟ್ಟಲು ಸರೋವರ
ಸುರಮಂದಿರವ ಕಟ್ಟಲು
ನರರೆಲ್ಲ ವಾಸಿಸುವ
ವರ ಗೇಹ ಕಟ್ಟಲಿಕ್ಕು
ಸರಿಯಾದ ಶಿಲೆಯ ಮರವ
ನೆರೆ ನಾನೆ ಕೊಡುವೆನಲ್ತೆ

ಸೃಷ್ಟಿಯಲ್ಲಿ ನನ್ನ ಹೋಲುವ ಶಿಷ್ಟಾತ್ಮನ
ನಿಟ್ಟಿಸುವುದೆಲ್ಲಿ ಹೇಳಿರಿ

ದಿಟ್ಟಧೀರ ಗುಣವ ನನ್ನ
ದಿಟ್ಟಿಸುತ್ತ ಸ್ವಾಮಿ ನನಗೀ
ಪಟ್ಟಾಕಟ್ಟಿ ಪೊರೆವನಲ್ತೆ
ಶ್ರೇಷ್ಠರೆಲ್ಲ ಬಲ್ಲರಿದ

# ಅರಳಿಯ ಕಟ್ಟೆ

ನಮ್ಮೂರ ಮುಂದೊಂದು ಅರಳಿಯ ಮರ ನಿಂದು
ಹೆಮ್ಮರವೆನಿಸಿಕೊಂಡಿಹುದು
ನಮ್ಮಜ್ಜ ಮುತ್ತಜ್ಜ ಅವರ ಹೆತ್ತಜ್ಜನು
ಹೆಮ್ಮೆಯಿಂದಲಿ ಹೊಗಳಿ ಹೋದ

ಹತ್ತು ಮಂದಿಯು ಕೂಡಿ ತಬ್ಬ ಬಹುದಾದಷ್ಟು
ಸುತ್ತಳತೆಯುಂಟು ಈ ಮರಕೆ
ನೆತ್ತಿಯ ನೋಡಲು ತೆಂಗಿನ ಮರಕಿಂತ
ಎತ್ತರವೇ ಎನ್ನಬಹುದು

ಸುತ್ತಮುತ್ತಲು ಕೊಂಬೆ ಮರಿಗೊಂಬೆಗಳು
ಛತ್ರಿಯ ಹಾಗೆ ತೋರುವುದು [ಹರಡಿ
ಮತ್ತೆಯು ಸುಂದರ ಕೋಮಲ ಪತ್ರವು
ಒತ್ತಾದ ನೆರಳ ನೀಡುವುದು

ಹಣ್ಣು ತಿನ್ನುವ ಹಕ್ಕಿ ಪಕ್ಷಿಯ ಸೌಂದರ್ಯ
ಕಣ್ಣಿಗೆ ಹಬ್ಬ ಮಾಡುವುದು
ಬಣ್ಣ ಕೆಂಪು ಹಸುರು ಉಳ್ಳ ಪಲ್ಲವಗಳ
ಬಣ್ಣಿಸಲಾರೆವು ನಾವು

ಬಲು ಸಣ್ಣ ಬೀಜವ ಕಾಗೆ ತಿನ್ನಲು ಅದರ
ಮಲದಿಂದ ಹುಟ್ಟಿದ ಮೊಳಕೆ
ಬಲಿತಿಷ್ಟು ಸೊಬಗಿನ ಘನ ವೃಕ್ಷವಾದುದು
ಬಲ್ಲಿದ ಸ್ವಾಮಿಯ ಕರುಣ

ಇದರ ಪಕ್ಕದಿ ಬೇವು ಮರವನ್ನು ಬೆಳೆಯಿಸಿ
ಮದುವೆಯ ಮಾಡಿ ಪೂಜಿಪರು
ಇದರ ಬುಡದಲಿ ಬ್ರಹ್ಮ ನಡುವೆ ನಾರಾಯಣ
ತುದಿಯೊಳಗೀಶ್ವರನೆಂದು

ಸುತರಿಲ್ಲದವರು ದುರ್ವ್ಯಾಧಿ ಪೀಡಿತರೂ
ವ್ಯಥೆಯಿಂದ ನರಳುವರೆಲ್ಲಾ

ಅತಿ ಭಕ್ತಿಯಿಂದ ನೂರೆಂಟು ಪ್ರದಕ್ಷಿಣೆ
ಪ್ರತಿ ನಿತ್ಯ ಮಾಡುವರಿದಕೆ

ಸತ್ತು ಹೋದರೆ ಸುತರು ಅಥವಾ ಜನಿಸದೆ ಇರಲು
ಕೆತ್ತಿಸಿ ನಾಗರ ಕಲ್ಲ
ಎತ್ತಿನಿಲ್ಲಿಸಿ ಈ ವೃಕ್ಷದ ಕೆಳಗಡೆ
ಹೊತ್ತು ಹೊತ್ತಿಗೆ ಪೂಜಿಸುವರು

ಅರಳಿಯೆಲೆಯ ನೀರು ಮಳೆ ಬಂದ ಕಾಲದಿ
ಸುರಿದು ಬೇವಿನ ಕಾಯ ಮೇಲೆ
ತರುವುದು ಸಾವಿರ ಶಿವಪೂಜಾ ಫಲವೆಂದು
ಪರಮ ಭಕ್ತರು ಪೇಳುತಿಹರು

ಕಲ್ಲಿನ ಜಗುಲಿಯ ಸುತ್ತಲೂ ಕಟ್ಟಿಸಿ
ಒಳ್ಳೆಯ ಗಾರೆಯ ಮಾಡಿ
ಎಲ್ಲಾ ಪಂಚಾಯ್ತಿಗೂ ನಮ್ಮೂರಿನವರೆಲ್ಲ
ಇಲ್ಲಿಯೇ ಸೇರುವ ರೂಢಿ

ಜನರೆಷ್ಟು ಸತ್ತರೊ ಹುಟ್ಟಿದವರು ಎಷ್ಟೊ
ಮನೆ ಬೀದಿ ಬದಲಾದುದೆಷ್ಟೊ
ಇನಿತಾದರು ತಾನು ನಿಂತಲ್ಲಿಯೇ ನಿಂತು
ಘನವಾದ ಸಾಕ್ಷಿಯಾಗಿಹುದು

ನಮ್ಮೂರಿಗೆಲ್ಲ ಈ ಅಶ್ವತ್ಥ ವೃಕ್ಷವೆ
ಹೆಮ್ಮೆಯ ಮುಪ್ಪಿನ ಬೊಪ್ಪ
ಸನ್ಮಾನವಾನುತ ಎಲ್ಲರಿಂದಲು ಈತ
ದುಮ್ಮಾನವಿಲ್ಲದೆ ಸುಖಿಪ

# ರೂಪಾಯಿ

ರೂಪಾಯಿ ನಾಣ್ಯವು ಭೂಪಾಲ ಮಾಡಿದ
ಸಿಪಾಯಿಯೆಂದರೆ ತಪ್ಪೇನು?
ಕಾಪಾಡುತೆಲ್ಲರ ಸರ್ವ ಸುಖಕ್ಕೊ
ಸೋಪಾನವೇ ಸಂಶಯವೇನು?

ಹುಟ್ಟಿದ ಇಸವಿಯ ಹರಡಿದ ದೇಶವ
ಆಳುವ ಅರಸನ ಮುದ್ರೆಯಲಿ
ಥಟ್ಟನೆ ತೋರಿಸಿ ಕೋರಿದ ವಸ್ತುವ
ಕೊಂಡುಕೊಟ್ಟು ಉಪಕರಿಸುವುದು

ಚಿಲ್ಲರೆ ಪಲ್ಲರೆ ವ್ಯಾಪಾರಗಳ
ಅರ್ಧಕಾಲು ರೂಪಾಯಿಂದ
ಸಲ್ಲಿಸಿ ಮತ್ತು ಆಣೆ ಕಾಸುಗಳ
ಚೆಲ್ಲಿಸಿ ಸತತವು ಮೆರೆಯುವುದು

ಗುಂಡು ಬಿಲ್ಲೆಯಿದ ಸವರುತ ಮಿಡಿಯುತ
ಕಲ್ಲೊಳು ಕುಕ್ಕಿ ಪರೀಕ್ಷಿಸುತ
ಕಂಡು ಹಿಡಿವರಿದು ಒಳ್ಳೆಯ ಬೆಳ್ಳಿಯೆ
ಸದ್ದು ಮುದ್ರೆ ಸರಿಯೇ ಎಂದು

ಚೀಲ ಜೇಬು ಪೆಟ್ಟಿಗೆ ಇಮ್ಮಣಿಯೊಳು
ತಂಗಿ ಕೈಲಿ ಕುಣಿದಾಡುತ್ತ
ಬಾಲರ ಮುದುಕರ ಮಹಿಳೆಯರೆಲ್ಲರ
ಮಾನ್ಯತೆಯನು ಪಡೆದೆಸೆಯುತ್ತ

ಇದನು ತಯಾರಿಸಿ ರಾಜ್ಯದಿ ಹರಡಲು
ರಾಜನೊಬ್ಬನೇ ಅಧಿಕಾರಿ
ಇದಕಾಗಿಯೆ ಜನ ದೇಹ ಬುದ್ಧಿಗಳ
ದಂಡಿಸಿ ದುಡಿವರು ಜಗದೊಳಗೆ

ಇದು ನನ್ನದು ಎಂದೆಲ್ಲರು ಜತನದಿ
ಕಾಪಾಡುವರಿದ ಬಚ್ಚಿಡುತ
ಅದು ಏನಾದರೂ ನಿಲ್ಲದೆ ಸರಿವುದು
ಒಂದೆಡೆಯಿಂ ಮತ್ತೊಂದೆಡೆಗೆ

# ಕಾಲ

ಕಾಲವು ಕಾಲವು ಕಾಲವು ಎಂದು
ಮೇಲಾಡುತ್ತಿದೆ ಜನವೆಲ್ಲ
ಕಾಲವು ಕಣ್ಣಿಗೆ ಕಾಣದೆ ಇದ್ದರು
ಮೇಳವಿಸುತ್ತಿದೆ ಮಹಿಯೆಲ್ಲ

ರವಿಯು ಹುಟ್ಟಲು ಪ್ರಾತಃಕಾಲ
ರವಿ ಬರೆ ನೆತ್ತಿಗೆ ಮಧ್ಯಾಹ್ನ
ರವಿ ಇಳಿಯುವುದೇ ಸಾಯಂಕಾಲವು
ರವಿಯೇ ಕಾಲವ ತಿಳಿಸುವನು

ಮಳೆಯು ತರುವುದೇ ವರ್ಷಾಕಾಲ
ಚಳಿಯ ಕೊಡುವುದೇ ಹಿಮಗಾಲ
ಚೆಲುವಿನ ಚಿಗುರಿನ ಕಾಲ ವಸಂತ
ಹೊಲಗಳ ಬೆಳೆಬರುವುದೇ ಸುಗ್ಗಿ

ದಿನ ವಾರ ಮುಹೂರ್ತಗಳೂ ಕಾಲವೆ
ಕ್ಷಣ ಜಾವ ನಿಮೇಷವು ಕಾಲ
ಗಣಿಸುವ ಗಂಟೆ ಸೆಕೆಂಡೂ ಕಾಲವೆ
ಜನಕೆ ಮಾತ್ರವೇ ಇದರರಿವು

ಯುಗ ಸಂವತ್ಸರವೆನಿಪುದು ಕಾಲ
ಹಗಲು ರಾತ್ರಿಯೆಂಬುದು ಕಾಲ
ಮೃಗ ಮಾಸಾಯನ ಪಕ್ಷವು ಕಾಲವೆ
ನಗಿಸುವುದಳಿಸುವುದೂ ಕಾಲ

ಹುಟ್ಟುತ ಬರುವುದು ಬಾಲ್ಯದ ಕಾಲ
ನಟ್ಟ ನಡುವೆ ಯೌವನ ಕಾಲ
ಕೆಟ್ಟುದು ಮುಪ್ಪಿನ ಕಾಲವು ಬಳಿಕ
ಕಟ್ಟಕಡೆಗೆ ಸಾಯುವ ಕಾಲ

ಕಾಲವು ಮಾನವನಾಯುಷವು ವೃಥಾ
ಕಾಲಹರಣಮೇ ಮರಣಮಲೆ

ಕಾಲಪುರುಷನೇ ಯಮನೆಂದೆಂಬರು
ಸೋಲನೆಂದಿಗೂ ತಾನವನು

ಶಾಲೆಗೆ ನಡೆಯುವ ವಿದ್ಯಾರ್ಥಿಗಳೂ
ರೈಲಿಗೆ ತೆರಳುವ ಪಯಣಿಗರೂ
ಸಾಲಗಾರನೂ ಸಂಬಳದವರೂ
ಕಾಲದ ಬೆಲೆಯನು ಬಲ್ಲವರು

ಕವಿದಿದೆ ತುದಿ ಮೊದಲಿಲ್ಲದೆ ಕಾಲ
ಹವಣಿಸಿ ಮಾಡಿದ ಗಡಿಯಾರ
ನವೆಯದೆ ಬೆಳಗುವ ಭಾಸ್ಕರ ಬಿಂಬವು
ಇವು ಸಣ್ಣಳತೆಯ ಯಂತ್ರಗಳು

ತಾಯಿತಂದೆಗಳು ಹೆಂಡಿರು ಮಕ್ಕಳು
ಸಾಯಲು ಸಂಭವಿಸಿದ ದುಃಖ
ಮಾಯುವುದೈ ಬಹು ಕಾಲವು ಕಳೆಯಲು
ಮಾಯಾ ಮಯವಿದು ಮಹಿಯೊಳಗೆ

ಹಿಂದಣ ಕಷ್ಟ ಸುಖಂಗಳ ನೆನೆಯುತ
ಮುಂದಕೆ ಸೌಖ್ಯವ ಬಯಸುತ್ತ
ಮಂದಿ ಮಧ್ಯದೊಳು ನರಳುತ ಕಾಲದ
ಬಂಧನಕ್ಕೆ ತಾ ಸಿಲುಕಿಹುದು

ನಶ್ವರವೆಲ್ಲವು ಕಾಲಮುದೊಂದೇ
ಶಾಶ್ವತವೆಂಬುದು ಸಿದ್ಧಾಂತ
ನಾಶವನಾನುವ ಮಾನವ ಬಲ್ಲನೆ
ಈಶನೊಬ್ಬನೇ ಇದ ಬಲ್ಲ

# ಹಾವಾಡಿಗ

ಬೇಗ ಬನ್ನೀ ಮೂರುಕಾಸು ತನ್ನೀ ನಿಮ್ಮ
ನಾಗಪ್ಪ ಬಂದವ್ನೆ ಓಡಿಬನ್ನಿ
ಓಡಿಬನ್ನೀ ಹಾಲು ಅಕ್ಕಿ ತನ್ನೀ ಈಗ
ಆಡುತಾನೆ ನಾಗಪ್ಪ ಓಡಿಬನ್ನಿ
ಬಾರೊ ಬಾರೋ ನಾಗಪ್ಪ ಬಾರೋ ಭಲ!
ತೋರೊ ನಿನ್ನ ಭಾರಿ ಹೆಡೆ ಬಿಚ್ಚಿ ತೋರೊ
ಹೋಗೊ ಹೋಗೋ ನಾಗಪ್ಪ ಹೋಗೋ ಬೇಗ
ಹೋಗಿ ಮುಂಗುಸಿಗೆ ಮುತ್ತು ಕೊಟ್ಟು ಬಾರೊ
ತುಂಡು ಹಾವು ಇದು ಗಂಡು ಹಾವು ಅದು
ಮಂಡಲದ ಹಾವು ಇದು ಕಂಡುನೋಡಿ
ಮೊಟ್ಟೆ ತಿಂದೂ ಮತ್ತು ನೆತ್ತಿಗೇರಿ ಬಿದ್ದಿದೆ
ಹೊಟ್ಟೆ ಎತ್ತಲಾರದೆ ಹೆಬ್ಬಾವು

ಕುಕ್ಕೆಯಲ್ಲೀ ತೆಕ್ಕೆಯಿಕ್ಕಿದೀ ಹಾವಿನ
ಪಕ್ಕಕ್ಕೆ ಹೋಗ ಬ್ಯಾಡಪ್ಪ ನೀನು

ಜಿನ್ನಂಗಾಳಿ ಊದುತೇನೆ ನೀವು ನೋಡಿ ಈ
ಪನ್ನಂಗವೆಲ್ಲ ತಲೆ ಕುಣಿಸುತಿವೆ

ಬುಸ್ಸು ಬುಸ್ಸೂ ಎಂತ ಹಾವು ಹೊಂಟ್ಹೋಯ್ತು
ಬೆಸ್ನೆಂತ ಕೆಳಗೆ ಇಳಿದ ಗರುಡಗಂಜಿ

ಗರುಡ ಕಾಯೋ ನಮ್ಮಪ್ಪ ನೀನೇ ಗತಿ
ಗುರುವು ನಿನ್ನ ಮಂತ್ರ ನನಗೆ ಕಲಿಸಿದಾನೆ

# ಕೈಗೋಲು

ಕೈಗೋಲು ಕೈಗೆ ಒಡವೆ
ಮೈಗಾವಲಲ್ತೆ ಇದುವೆ
ರೋಗಿಗಳು ವೃದ್ಧ ಜನರು
ಭೋಗಿಗಳು ಕೂಡ ಬಿಡರು

ಹರಿದೋಡಿ ಬರುವ ಹಾವು
ನೆರೆ ಬಗುಳಿ ಬರುವ ನಾಯಿ
ಭರದಿಂದ ಬರುವ ವೈರಿ
ಸರಿದೋಡಿ ಪೋಪರಿದಕೆ

ಬದಿಯೊಳಗೆ ಕತ್ತಲೊಳಗೆ
ಎದುರಾದ ದನಗಳೊಳಗೆ
ಇದು ತೋರ್ಪ ಮಹಿಮೆ ಎಷ್ಟೊ
ಅದ ಹೇಳಲಾರೆ ನಾನು

ಕುರುಡನಿಗೆ ಕೋಲೆ ಕಣ್ಣು
ನೆರೆ ಕುಂಟಗಿದೆಯೆ ಕಾಲು
ಹರಿವಂಥ ನೀರಿನಲ್ಲಿ
ಸರಿಯಾವುದುಂಟು ಇದಕೆ

ಮೇಲಿಂದ ಬರುವ ಹಕ್ಕಿ
ಕೀಳಾದ ಕಾಡು ಮೃಗವ
ಕೋಲಿಂದ ತಡೆದು ನಾವು
ಮೇಲಾಗಿ ಬಾಳಬಹುದು

ಚೆಲುವಾದ ಹುಲಿಯ ಮುಖವೊ
ನಲಿವಂಥ ನಾಯ ತಲೆಯೊ
ಬಲವಾದ ಸರ್ಪಶಿರವೊ
ತಲೆಯಲ್ಲಿ ತಳೆದು ಹೊಳೆವ

ಹೊರಗೆ ಪ್ರಯಾಣದಲ್ಲಿ
ನರರೆಲ್ಲ ಚೆಲುವ ಕೋಲ
ಕರದಲ್ಲಿ ಪಿಡಿದು ಸುಖಿಪ
ಪರಿ ರೂಢಿ ನಮ್ಮೊಳೀಗ

# ಯುಗಾದಿ

ಹಬ್ಬ ಬಂತು ಯುಗಾದಿ ಹಣದ ವೆಚ್ಚಕೆ ಹಾದಿ
ಒಬ್ಬಟ್ಟು ಹೋಳಿಗೆಯು ದೊಡ್ಡ ಹಬ್ಬ
ಅಬ್ಬಬ್ಬ ! ಹದಿನೈದು ದಿನಕಿಂತ ಹಿಂದಿನಿಂ
ಮಬ್ಬುತ್ತ ಸನ್ನಾಹ ಮಾಡಿಯಾಯ್ತು

ಸುಣ್ಣ ಬಣ್ಣಗಳಲಂಕಾರಗಳು ಮನೆ ಮನೆಗೆ
ಮಣ್ಣು ಕಾರಣೆ ರಂಗವಲ್ಲಿ ಹಸೆಯು
ಹಣ್ಣು ಹಂಪಲು ಹೂವುಗಳ ಸುಗ್ಗಿಯೋ ಸುಗ್ಗಿ
ಸಣ್ಣವರು ಕುಣಿಯುವರು ಹಿಗ್ಗಿ ಹಿಗ್ಗಿ

ಮಾವಿನೆಲೆಗಳ ತೋರಣಗಳು ಬಾಗಿಲುಗಳಿಗೆ
ಬೇವಿನೆಲೆಗಳ ಕುಚ್ಚು ಪಕ್ಕಗಳಿಗೆ
ಯಾವುದಾದರು ಒಂದು ಪಂಚಾಂಗ ಪೂಜೆಗೆ
ಯಾವುದಾದರು ಎಣ್ಣೆಯೂ ನೆತ್ತಿಗೆ

ಚೆಲುವಾದ ಚೈತ್ರದೊಳು ತಳಿರುಂಡು ನಲಿನಲಿದು
ಉಲಿಯೆ ಕೋಗಿಲೆಯು ಮಂಗಳ ಗಾನದಿ
ಅಳಿಯ ಹಬ್ಬಕೆ ಬರಲು ಮಗಳ ಮೊಗ ಅರಳಿದುದು
ಬಳಸಿ ನಿಂದರು ಭಾವಮೈದಂದಿರು

ಮಿಂದ ಮೇಲೆಲ್ಲರೂ ಹೊಸ ಉಡುಗೆ ತೊಡುಗೆಗಳ
ಅಂದ ಚಂದಗಳಿಂದ ಉಟ್ಟು ತೊಟ್ಟು
ಬಂದು ಜೋಯಿಸರು ಪಂಚಾಂಗವನು ಪೂಜಿಸಲು
ವಂದಿಸುತ ವರುಷ ಫಲವನು ಕೇಳ್ವರು

ಚಂದ್ರ ತಾರಾಬಲವ ಹೇಳಿಬಿಡಿ ಈ ವರುಷ
ಬಂದೀತೆ ಗ್ರಹಣ? ಸಂಕ್ರಾಂತಿಯೆಂತು?
ಎಂದು ಕೇಳುತ ಪುಷ್ಪ ತಾಂಬೂಲ ದಕ್ಷಿಣೆಯ
ಸಂದಾಯ ಮಾಡುತ್ತ ಸತ್ಕರಿಪರು

ಅಂತರಿಕ್ಷದಿ ಚಲಿಸಿ ಜಗಕೆ ಫಲಗಳ ಕೊಡುವ
ಕಾಂತಿಯುತ ಸೂರ್ಯ ಬುಧ ಗುರು ಶುಕ್ರರು

ಮುಂತಾದ ಗ್ರಹಗಳನು ನೆರೆ ತಿಳಿಯಲಾರೆವೈ
ಎಂತು ತಿಳಿಸುವುದೊ ಪಂಚಾಂಗ ಫಲವ

ಮೇಲು ಮೇಲಾದ ಮಂತ್ರೋಪಚಾರಗಳಿಂದ
ದೇವರನು ಪೂಜಿಸಿ ನಿವೇದಿಸಿರ್ಪ
ಬೇವು ಬೆಲ್ಲವ ಸವಿದು ಈ ವರುಷವೆಲ್ಲವೂ
ತಾವು ಸುಖವಾಗಿರುವೆವೆಂದೆಣಿಪರು

ತನ್ನ ಪಥದೊಳು ಭೂಮಿ ಸೂರ್ಯನು ಸುತ್ತುವ
ಮುನ್ನೂರು ಅರವತ್ತು ಐದು ದಿನದ
ಹನ್ನೆರಡು ತಿಂಗಳೇ ನಮಗೊಂದು ವರುಷವು
ಎನ್ನುವರು ಇದರಾದಿ ದಿನ ಯುಗಾದಿ

ಯಾವ ವಾರ ಯುಗಾದಿ ಹಬ್ಬವಾಚರಿಸುವೆವೊ
ಆ ವಾರದೊಡೆಯನೆಂದೆನಿಪ ಗ್ರಹವೇ
ಆ ವರುಷಕೆಲ್ಲಕೂ ದೊರೆಯಾಗಿರುವನೆಂಬ
ಭಾವನೆಯು ನಮ್ಮ ಸಿದ್ಧಾಂತದಲ್ಲಿ

ವರುಷ ವರುಷಕೆ ಬೇರೆ ಹೆಸರುಂಟು ನಮ್ಮಲ್ಲಿ
ಅರುವತ್ತು ಈ ಸಂಖ್ಯೆ ಒಟ್ಟಿನಲ್ಲಿ
ಬರುವುದೈ ಬಂದ ಹೆಸರಿನ ವರುಷವೇ ಮತ್ತೆ
ಅರುವತ್ತು ವರುಷಕ್ಕೆ ಸುತ್ತಿ ಸುತ್ತಿ

ಬಗೆ ಬಗೆಯ ರುಚಿ ರುಚಿಯ ಭಕ್ಷ್ಯ ಭೋಜ್ಯಗ
ಳೂಟ
ಬಗೆ ಬಗೆಯ ಬಂಧುಗಳ ಸಂತೋಷ ಕೂಟ
ಬಗೆ ಬಗೆಯ ಗುರುಹಿರಿಯರುಗಳು ಹರಸಿದ ಹರಕೆ
ಮಿಗೆ ಈ ಯುಗಾದಿಯೊಳ್ ಸೌಖ್ಯವಾಳ್ಕೆ

# ಅಗ್ನಿ

ಅಗ್ನಿಯಿಂದಲೇ ನಮ್ಮ ಹಿರಿಯರು
ಯಜ್ಞವ ಮಾಡಿದರಲ್ಲವೆ
ಅಗ್ನಿಮೀಳೆಯ ವೇದವ ಪಠಿಸಿ
ಸ್ವರ್ಗವ ಸೇರಿದರಲ್ಲವೆ

ಬೆಂಕಿಯೆನಿಸುತಿಹ ವರವನು ನರನಿಗೆ
ಶಂಕರನಲ್ಲವೆ ಕೊಟ್ಟವನು
ಬೆಂಕಿಯ ಉಪಯೋಗಗಳನು ಬಲ್ಲವೆ
ಮಂಕುಜಂತುಗಳು ಮಹಿಯೊಳಗೆ

ಆದಿಯಲ್ಲಿ ಪಶುಗಳಿಗೂ ಮನುಜಗು
ಭೇದವೆ ಏನೂ ಇರಲಿಲ್ಲ
ವೇದವು ಅಗ್ನಿಯ ಅವರಿಗೆ ತಿಳಿಸಲು
ಪೋದುದವರುಗಳ ಅಜ್ಞಾನ

ಹಸಿಯ ಪದಾರ್ಥವೆ ಅವರುಗಳೂಟ
ಬಿಸಿಯ ತಿಂಡಿ ತಿಳಿದಿರಲಿಲ್ಲ
ಪಶುವಾಗಿದ್ದಾ ಮನುಜರಿಗಗ್ನಿಯು
ವಶವಾಗಲು ಸುಖ ಲಭಿಸಿದುದು

ಸೂರ್ಯನಿದ್ದರೂ ಕೂಡ ಅಗ್ನಿಯೆ
ಆರ್ಯಜನಕೆ ಗೃಹದೇವತೆಯು
ಆರ್ಯರ ಗೃಹದೊಳಗಗ್ನಿಯ ಪೂಜೆಯು
ಸಾರ್ವಕಾಲಿಕವು ಎನಿಸಿದುದು

ಹವನ ಹೋಮಗಳ ಮಾಡುತ ಪೂಜಿಸಿ
ಹವ್ಯಕವ್ಯಗಳ ಕಾಲದೊಳು
ಇವನ ಪೋಷಿಸುತ್ತಿದ್ದರು ಎಂಬುದು
ಅವನಿಯೊಳೆಲ್ಲ ಪ್ರಸಿದ್ಧವು

ಬೆಂಕಿಯಿಂದ ಆಹಾರ ಬೇಯುವುದು
ಬೆಂಕಿಯಿಂದ ಜಲ ಕುದಿಯುವುದು

ಬೆಂಕಿಯು ಚಳಿಯನು ನೀಗುತ ಪೊರೆವುದು
ಬೆಂಕಿಯೆ ನಮ್ಮಯ ಭಾಗ್ಯವು

ಬೆಂಕಿಯಿಂದಲೆ ಭಕ್ಷ್ಯವು ಭೋಜ್ಯವು
ಬೆಂಕಿಯೆ ದೀಪವು ಧೂಪವು
ಬೆಂಕಿಯಿಂದಲೆ ಸಕಲ ಕಾರ್ಯವೂ
ಬೆಂಕಿಯೆ ರಕ್ಷಿಪುದೆಲ್ಲರನು

ಉಗಿಯ ತಯಾರಿಸಿ ರೈಲನು ನೂಲನು
ತೆಗೆಯುವ ನೇಯುವ ಕತ್ತರಿಪ
ಬಗೆಬಗೆ ಯಂತ್ರಗಳನ್ನೆಲ್ಲವನೂ
ಜಗದೊಳು ನಡೆಸುವುದೀ ಅಗ್ನಿ

ಗಾಳಿಯು ಬೀಸುತ ಏಳಿಸಿ ಅಗ್ನಿಯ
ಓಲಗಿಸುತ ಉರಿಗೈಯುತಲಿ
ಬಾಳುತಲಿರುವರು ಮನುಜರು ಮಹಿಯೊಳು
ಗಾಳಿಯೆ ಗೆಳೆಯನು ಪಾವಕಗೆ

ನೀರು ದಹನನಿಗೆ ಪರಮ ವೈರಿಯು
ನೀರು ಆರಿಸುವುದಗ್ನಿಯನು
ಯಾರು ತಾನೆ ತಾವ್ ಮುಟ್ಟಲು ಬಲ್ಲರು
ಘೋರ ಕೃಶಾನುವ ಕೆಂಡವನು

ಅಂಕೆಯೊಳಿದ್ದರೆ ಆಳಿನಂತೆ ಇಹ
ಬೆಂಕಿ ಸಕಲವನು ಭಕ್ಷಿಪುದು
ಅಂಕೆ ತಪ್ಪಲಿದು ದಣಿಯನೆ ಸುಡುವುದು
ಮಂಕನು ಕವಿಸುತ ಸರ್ವರಿಗೂ

ಹುಲ್ಲು ಒಣಮರ ಎಣ್ಣೆಯು ತುಪ್ಪವು
ಒಳ್ಳೆಯ ತಿಂಡಿಗಳನಲನಿಗೆ
ಬಲ್ಲಿದನೀತನು ಬೇಸಗೆ ಕಾಲದಿ
ಬಲ್ಲರಿದನು ಎಲ್ಲಾ ಜನರು

ಕಲ್ಲನು ಕುಕ್ಕುತ ಕಿಡಿಯನು ಹಾರಿಸಿ
ಹುಲ್ಲು ಸೌದೆಗಳನಿಟ್ಟುರಿಸಿ

ಎಲ್ಲ ಕಷ್ಟಗಳ ಪೂರ್ವದೊಳೀ ನರ
ರೆಲ್ಲಾ ಅನುಭವ ಪಡೆದಿಹರು

ಇಂದು ಬೆಂಕಿಯನು ಪಡೆವುದು ಸುಲಭವು
ಒಂದು ಬಗೆಯ ಕಡ್ಡಿಯ ಹಿಡಿದು
ಒಂದು ವಸ್ತುವಿನ ಮೇಲೆ ಗೀಚಿದರೆ
ಬಂದು ತೋರುವನು ಪಾವಕನು

ಬೆಂಕಿಯೆನ್ನುವುದು ವಸ್ತುವದಲ್ಲವು
ಬೆಂಕಿಯೊಂದು ದೈವಿಕ ಶಕ್ತಿ
ಬೆಂಕಿಯಿಂದಲೇ ಲೋಕವು ಸುಖಿಪುದು
ಶಂಕೆ ಇದಕ್ಕೇನಿನಿತಿಲ್ಲ

# ಸಾಲು ಮರ

ಸಾಲಿನ ಮರಗಳ ಸೊಗಸನು ನೋಡಿ
ಮೈಲಿಗಳೆಷ್ಟಾದರೂ ನೀವೋಡಿ
ಹೊಂದಿ ರಸ್ತೆಗಳ ಪಕ್ಕಗಳಲ್ಲಿ
ಒಂದಿನ್ನೊಂದರ ಮಗ್ಗುಲಿನಲ್ಲಿ
ಎಂದೂ ಅಗಲದ ಗೆಳೆತನದಿಂದ
ಒಂದರ ಎದುರಿಗೆ ಇದೆ ಮತ್ತೊಂದು

ಕೊಂಬೆ ಕೈಗಳಿಂದೊಂದಕ್ಕೊಂದು
ಗುಂಭದಿಂದ ತಬ್ಬುತ್ತಲಿ ನಿಂದು
ಚೆಲುವಿನ ಹಸುರಿನ ಕವಚವ ತೊಟ್ಟು
ತಲೆಗಳ ಬಾಗದೆ ಮೇಲಕ್ಕಿಟ್ಟು
ಬಂದು ಹೋಗುತಿಹ ದಾರಿಗರನ್ನು
ನಿಂದೆಡೆ ನಿಂತೇ ಸಕಲ ಮಂದಿಗೂ

ಮನ್ನಣೆ ಮಾಡುವ ದಂಡಿನ ಭಟರೊ
ಎನ್ನುವ ತೆರದೊಳು ತೋರುತ ತಾವು
ತಂಡತಂಡದೊಳು ದಾರಿಯೊಳೋಡುವ
ಬಂಡಿ ಬೈಸಿಕಲ್ ಮೋಟಾರುಗಳ
ಸದ್ದನೆಲ್ಲವನು ಸಹಿಸುತ ತಾವು
ಗದ್ದಲ ಮಾಡದೆ ಕೋಪವನೆಸಗದೆ
ಛೆಸ್ಸೆಂದನಿಲವು ಬೀಸಿದ ವೇಳೆ
ಅಸ್ಸುಸ್ಸೆನ್ನುತಲಿ ನಿಡುಸುಯ್ಯುತ್ತ
ಪಾಂಥರಿಗೆ ಸದಾ ನೆರಳ ಕೊಡುತ್ತ
ಸ್ವಾಂತಕ್ಕಾನಂದವನೆಸಗುತ್ತ
ಬಾಯಾರಿದರಿಗೆ ಫಲಗಳ ಕೊಡುತ
ತಾಯಂತೆಲ್ಲರೊಳಕ್ಕರೆಯಿಡುತ
ಹಕ್ಕಿಪಕ್ಷಿಗಳ ಮರಿಗಳ ಕೂಡಿ
ಒಕ್ಕಲುತನಗಳಿಗೆಡೆಗಳ ಮಾಡಿ
ಸಣ್ಣ ಕೊಂಬೆಗಳ ಕೈಬೆರಳಿಂದ

ಸನ್ನೆಯ ಮಾಡುತ ದಾರಿಗರನ್ನು
ತರಣಿಯ ಕಿರಣದಿ ತಾವೆ ಬೆಂದರೂ
ಪರರನು ತಣ್ಣಗೆ ಹಾಯಾಗಿಟ್ಟು
ಕರುಣದಿ ಪಾಲಿಸುತಿರುವ ಸೊಬಗಿನ
ತರುಗಳು ಲೋಕಕೆ ಬಂಧುಗಳಷ್ಟೆ

ಜಾತಿಭೇದಗಳ ದುರ್ಭಾವನೆಯ
ಪಾತಾಳಕೆ ತುಳಿದೊಗ್ಗಟ್ಟಾಗಿ
ವಾತಾಹತಿಯನು ತಡೆಯಬಲ್ಲ ಬಹು
ಚೈತನ್ಯವ ತಾಂ ಪಡೆದಿಹವು

ಕಷ್ಟಗಳೆಲ್ಲವ ತಾವೇ ಸಹಿಸುತ
ಇಷ್ಟುಪಕಾರವ ನಮಗೆಸಗುತಿಹ
ಶ್ರೇಷ್ಠವಾದ ಈ ಸಾಲು ಮರಗಳನು
ಎಷ್ಟು ಹೊಗಳಬೇಕೈ ನಾವು

ಎರಡೇ ಎಳೆಗಳ ಸೊಪ್ಪಿನ ಹಾರವ
ಧರಣಿಗೆ ತೊಡಿಸಿದ ರೀತಿಯೊಳೊಪ್ಪುತ

ಮಂಗಳ ಚೈತ್ರ ವಸಂತದಿ ಚಿಗುರಿ
ಸಿಂಗರಿಸಿದ ತೇರಂತೆಯೆ ತೋರಿ
ಸಾಲಿನ ಮರಗಳು ನಲಿದೆಸೆಯುವುವು
ಚೆಲುವಿನ ನೋಟವ ನೀಡುವುವು

# ಕಂದಾಯ

ಕಂದಾಯ ಬಂತಪ್ಪಾ ಮುಂದೇನು ಗತಿಯಪ್ಪ
ಸಂದಾಯ ಮಾಡ್ದಿದ್ರೆ ಸರಿಯೋರ್ಮ್ಯಂದೆ
ಚೆಂದಾಗಿರೋಕಿಲ್ಲ

ತೋಟೀ ತಿಮ್ಮ್ಯಾ ಬಂದಾ ಟೂಂಕೀಯ ಬಡಿದ್ಹೋದ
ನೋಟೀಸು ಬರ್ತೈತೆ ನಾಳೀ ಕೊಡ್ದಿದ್ರೆ
ಅಂತೆಂತ ಸಾರ್ಹ್ಯೋದ

ಶಾನ್ಭಾಗ್ರು ಬಂದವ್ರೆ ಚಾವಡ್ಯಾಗೆ ಕುಂತವ್ರೆ
ಗೌಡಾ ಶಾನ್ಭಾಗಾ ಎಳ್ತರ್ತ ಎಂದ್ರೆ
ನನ್ಯಾರ್ ಬಿಡ್ತಾವ್ರೆ?

ಕೋಳೀ ಪಿಳ್ಳೇ ಕೊಟ್ನೇ ಗೂಳೀಯ ಮಾರ್ಬಿಟ್ನೆ
ಏಳೀ ರೂಪಾಯ್ಪಂತು ಏಳಾಣೆ ಸಾಲ್ದು
ಹಾಳಾದ ಕಂದಾಯ

ಸೊಪ್ಪೂ ಸೊರೇಕಾಯಿ ಸೌತೇ ಈರೇಕಾಯಿಯಾ
ಸಂತೇಲಿ ಮಾರಿ ದುಡ್ಡ ಸೊಣ್ಣಕ್ಕ ತಂದವ್ನೆ
ಸಮಾರ್ಡ್ಬುಡ್ತೀನೀ

ಸಮಾರ್ಡಿಕೊಂಡೀ ಹುರಿಮೀಸೆಯಾ ತೀಡಿ
ಬಕೊರ್ಳ್ಳಿ ಶಾನ್ಬಾಗ್ರು ಕಿರುಕೊಳ್ಳ ಮಾಡ್ಬ್ಯಾಡಿ
ಸರ್ಯಾಗಿ ನೋಡ್ಕೊಳ್ಳಿ

ಪಸಕ್ನೆ ದುಡ್ನೆಲ್ಲಾ ಕಸ್ಕೊಂಡ ಶಾನ್ಬಾಗಾ
ಮಶ್ಕಾಣಿಕೇ ಕೊಟ್ರೆ ರಶೀತಿ ಕೊಟ್ಟೇನು
ಇಲ್ದಿದ್ರಿಲ್ಲೆಂದ

ಬಂತಪ್ಪ ಪೇಚಾಟ ಬಂತಪ್ಪ ಗೋಳಾಟ
ಬಂತಪ್ಪ ಶಾನ್ಬಾಗ ತಂದಿಟ್ಟ ಕಾಟಾ
ದುಡ್ಡಿಗೆ ಪರದಾಟ

ಉಡುದಾರ್ದ ತಾಯ್ತ್ಯಾಗೆ ಮಡಗಿದ್ದ ದುಡ್ನ್ಯಾಗೆ
ಬಡಕೊಂಡು ಬಡಕೊಂಡು ಕೊಡ್ಬೇಕಾಯ್ತು
ಬೆಳ್ಳೀದು ಒಂದ್ಪಾವ್ಲೆ

# ಗಾಳಿ

ಎಲ್ಲೆಲ್ಲಿ ನೋಡಿದರು ಮೆಲ್ಲಮೆಲ್ಲನೆ ಗಾಳಿ।
ಅಲ್ಲಾಡಿಸುತ್ತಿಹನೆಲ್ಲ ಮರವ
ಉಲ್ಲಾಸ ಬಂದರೆ ಚೆಲ್ಲಾಟವಾಡುತ
ಚೆಲ್ಲಾಡುವನು ತಾನು ಹುಲ್ಲು ಮನೆಯಾ

ಕಣ್ಣಿಗೆ ಕಾಣನು ಕೈಯಿಗೆ ಸಿಕ್ಕನು
ಮಣ್ಣನ್ನೆರಚುವನಲ್ಲಲ್ಲಿ
ಸಣ್ಣ ಸಣ್ಣ ಬೀಜ ಬಿತ್ತಿ ಹಣ್ಣು ಹೂವು ವಾಸನೆಯು
ಚೆನ್ನಾಗಿ ತೋರುವನಣ್ಣಯ್ಯ

ಪ್ರಾಣಿ ಸಸ್ಯವರ್ಗ ಪ್ರಾಣವನುಳಿಸುವ
ಜಾಣನು ಬೆಂಕಿಯನುರಿಸುವನು
ಏನೇನೊ ಸದ್ದನು ತಾನಾಗಿ ತಂದುಕೊಟ್ಟು
ನೀನಾಗಿ ಕೇಳುವಂತೆ ಮಾಡುವನು

ನೆಗೆಸಿದ ಪಟಗಳ ಸೊಗಸಿಂದಾಡಿಸಿ
ನಗಿಸುವ ನಮ್ಮನು ಬಿರುಗಾಳಿ
ಮುಗಿಲುಗಳಿಲ್ಲವ ಗಗನದೊಳೋಡಿಸಿ
ಜಗದೊಳಗೆಲ್ಲಾ ಹರಡುವನು

ತಂಗಾಳಿ ಬೀಸಿದರೆ ಅಂಗ ಪರಿಶ್ರಮ
ಮಂಗಮಾಯವಾಗುವುದೈ ನೋಡು
ಮಂಗಳ ಮಹಿಮನ ಕೃಪೆಯಿಂ ವಾಯುವು
ಸಂಘಟಿಸಿದೆ ಭೂಲೋಕಕ್ಕೆ

ಹಡಗು ವಿಮಾನವ ನಡೆವುದು ಗಾಳಿ
ಒಡೆವುದವುಗಳನು ಬಿರುಗಾಳಿ
ತಡೆಯಲು ಗಾಳಿಯ ಗಿರಿಯೊಂದಲ್ಲದೆ
ಕಡುಗಲಿ ಮತ್ತಾವುದು ಉಂಟು

ಒತ್ತಾಗಿಹುದೀ ಭೂಮಿಯ ಸುತ್ತಲು
ಎತ್ತರದಲಿ ವಿರಳವು ಗಾಳಿ

ಎತ್ತಿ ಕಸವ ತಂದೆರಚುವ ಗಾಳಿ
ಮತ್ತದ ಗುಡಿಸುವುದೂ ಗಾಳಿ

ಚಲನೆಯನಿತ್ತು ತರಂಗವ ನಿರ್ಮಿಸಿ
ಜಲದ ಕೊಳೆಯನೆಲ್ಲವ ಕಳೆದು
ನೆಲೆಯೊಂದಿಲ್ಲದೆ ಚಲಿಸುತ್ತ ಸದಾ
ಬಲವನು ವಾಯುವು ತೋರುತಿದೆ

ವಾಯು ಒಂದು ಕಡೆ ಬಹು ಆರೋಗ್ಯವ
ನೀಯುವುದೆನ್ನುತ ಹೊಗಳುವರು
ವಾಯುವು ಬೇರೊಂದೆಡೆಯಲಿ ರೋಗವ
ನೀಯುವುದೆನ್ನುತ ಜರೆಯುವರು

# ಸೂರ್ಯ

ಸೂರ್ಯನೆಂಬುದು ಜ್ವಾಲೆಯ ಚೆಂಡು
ಚೌರ್ಯಕೆ ವಿಘ್ನದ ಕಲ್ಲಿನ ಗುಂಡು
ಶೌರ್ಯ ಸಾಹಸಕ್ಕೆಲ್ಲಾ ಗಂಡು
ಆರ್ಯರು ನುತಿಪರು ಇದ ಮನಗಂಡು

ಮೂಡಣ ದೆಸೆಯೊಳು ಮೂಡಲು
ಸೂರ್ಯನು
ಓಡಿತು ಕತ್ತಲೆ ತತ್ತರಿಸುತ್ತ
ಕಾಡಿನ ದುಷ್ಟ ಮೃಗಂಗಳು ಬೆದರಿ
ಹೇಡಿಗಳಂತೆಯೆ ಅವಿತವು ಹೆದರಿ

ಹಕ್ಕಿಪಕ್ಷಿಗಳ ಮಂಗಳ ಗಾನ
ಮಕ್ಕಳ ಮುಂಜಾನೆಯ ಸುವ್ಯಾನ
ಒಕ್ಕಲಿಗರ ಉಳುಮೆಯ ಚಚ್ಚರವು
ಸೊಕ್ಕಿದ ಲೋಕಕ್ಕಾಯ್ತೆಚ್ಚರವು

ಲೋಕಕೆ ಹರಣವೆ ಬಂದಂತಾಯ್ತು
ಆಕಾಶದ ಬಯಲೆಲ್ಲಾ ಬೆಳಗೆ
ಶೋಕವು ರೋಗವು ತಗ್ಗಿತು ಜನಗಳ
ಏಕಾಕಿತ್ವದ ಹೆದರಿಕೆ ಹೋಗಿ

ಎಳೆ ಬಿಸಿಲೇರಿತು ಬೆಟ್ಟದ ತುದಿಗೆ
ಥಳಥಳಿಸಿತು ಚಿಗುರೆಲೆಗಳ ಮೇಲೆ
ಹೊಳೆಯಿತು ಗೋಪುರ ಕನ್ನಡಿ ಕಲಶ
ಬೆಳಕು ನುಗ್ಗಿ ಮನೆಯೊಳಭಾಗಕ್ಕೂ

ಮಲಿನತೆ ಬಂದಿತು ಚಂದ್ರಗೆ ದೀಪಕೆ
ಚಳಿಯೆಲ್ಲೋಡಿತೊ ಬಿಸಿಲನು ಕಂಡು
ನಲಿಯಿತು ಜನ ಹಣವನು ಕಂಡಂತೆ
ಕೆಲಸ ಕಾರ್ಯಗಳ ಚಳುವಳಿ ಹೆಚ್ಚಿ

ಹೂಗಳ ಮೊಗ್ಗುಗಳರಳಿ ಸುಗಂಧ
ಮೇಘವಿಲ್ಲದಾಕಾಶದ ಚಂದ

ಮೋಗಡೆ ಭಾಸ್ಕರ ಮೂರ್ತಿಯು ಬಂದ
ಬೇಗ ಸಕಲರಿಗೆ ಆಯ್ತಾನಂದ

ಸಾರಣೆ ಕಾರಣೆ ಮನೆಬಾಗಿಲಿಗೆ
ಪಾರಣೆ ಆತುರಗಾರ ಜನರಿಗೆ
ಊರಿಗೆ ನೀರಿಗೆ ದಾರಿಗೆ ಜನರಿಗೆ
ಯಾರೊಬ್ಬರಿಗೂ ಬಲು ಸಂಭ್ರಮವು

ಹೊಸ ದಿನ ಹುಟ್ಟಿತು ಸೂರ್ಯನು ಹುಟ್ಟಲು
ಹೊಸದು ವಾಸರವು ಮೇಣ್ತಾರೀಖು
ಹೊಸ ಶಕ್ತಿಯನೇ ಪಡೆದಂತಾಗಿ
ಎಸೆದರು ಸಕಲರು ಸಡಗರದಿಂದ

ತರಣಿಯು ಮೇಲಕೆ ಬಂದಂತೆಲ್ಲಾ
ನೆರಳು ಹೆದರಿ ಮೋಟಾಗುತ್ತಿಹುದು
ತರಣಿ ಇಳಿಯುತಲಿ ಬಂದಂತೆಲ್ಲಾ
ನೆರಳು ಹೆಚ್ಚುತಲಿ ಬೆಳೆಯುತ್ತಿಹುದು

ಬೇಸಗೆಯಲಿ ರವಿತಾಪವು ಹೆಚ್ಚು
ಆ ಸೂರ್ಯನ ಬಿಸಿ ಚಳಿಯೊಳು ಮೆಚ್ಚು
ಹೇಸಿಕೆ ವಸ್ತುವ ಸೂರ್ಯನು ಸುಟ್ಟು
ಭಾಸಿಪ ಲೋಕದಿ ಕರುಣವನಿಟ್ಟು

ಸರ್ವರಿಗಾದಿತ್ಯನೆ ಬಾಂಧವನು
ಸರ್ವ ಸಾಕ್ಷಿ ನಿಷ್ಪಕ್ಷನು ತಾನು
ಸರ್ವರು ಬೆಳಕನು ಶಾಖವ ಪಡೆಯುತ
ಗರ್ವಪಡುವುದೀತನ ಕೃಪೆಯಿಂದ

ರವಿಯಿಲ್ಲದೆ ಮಳೆ ಬೆಳೆ ನಮಗಿಲ್ಲ
ರವಿಯಿಲ್ಲದೆ ಕಾಲದ ಅರಿವಿಲ್ಲ
ರವಿಯಿಲ್ಲದೊಡೀ ಲೋಕವೆ ಇಲ್ಲ
ಇವು ಏನೂ ಇಲ್ಲದೆ ನಾವಿಲ್ಲ

ಆರೋಗ್ಯವ ಆಯುಷ್ಯವನಿತ್ತು
ಶಾರೀರಕ ಸೌಂದರ್ಯವನಿತ್ತು

ಸೂರ್ಯಸ್ವಾಮಿ ಸಮಸ್ತ ಜನರನೂ
ಸರ್ವ ಕಾಲವೂ ಸಲಹುತ್ತಿಹನು

ಅಹದೊಳು ರವಿ ಕಾಣಿಸದೊಡೆ ದುರ್ದಿನ
ಬಹಳ ಮಂಕುತನ ಜನಕಂದಿನ ದಿನ
ತಹತಹಗುಟ್ಟುತ್ತಿಹುದು ಬಹು ಜನ
ಗ್ರಹಣ ದಿವಾಕರಗುಂಟಾದಾಗ

# ಮನೆ

ಮನೆಮನೆಯೆಂಬರು ನನ್ನ ॥ ಪ ॥
ಜಾಣ ಮನುಜರು ನಿರ್ಮಾಣ ಮಾಡಿಹರೆನ್ನ॥ಅ.-ಪ.॥

ಹುಲ್ಲಿನ ಮನೆಯೆ ಝೋಪಡಿಯು
ಚೆಲ್ವ ಕಲ್ಲಿನ ಮನೆಗಳೆ ಮಂಟಪವಾಗಿ
ಹುಲ್ಲಿನ ಮನೆಯೊಳಗಿರುವರು ಬಡವರು
ಕಲ್ಲ ಮನೆಯೊಳು ದೇವರನು ಪೂಜಿಸುವರು

ಮಣ್ಣಿನ ಹೆಂಚಿನ ಸದನ
ಬಣ್ಣ ಬಣ್ಣದ ಗಾರೆಯ ಸುಂದರ ಭವನ
ಮಣ್ಣು ಹಂಚಿನ ಮನೆಯೊಳಿರುವರು ಬಡವರು
ಪುಣ್ಯವಂತರು ಗಾರೆ ಮನೆಯೊಳಗಿಹರು

ತೊಟ್ಟಿ ಭವಂತಿ ಮಂದಿರವು
ಪುಟ್ಟ ಹಟ್ಟಿ ಹಜಾರದ ಗೃಹವು ಸುಂದರವು

ತೊಟ್ಟಿ ಭವಂತಿಯೊಳಿರುವರು ಅರಸರು
ಪಟ್ಟಣದಲ್ಲಿವನು ಬಹಳ ಕಟ್ಟಿಹರು

ಅಂಗಡಿ ಪಡಸಾಲೆ ಮಹಡಿ
ತುಂಗ ರಂಗಮಂಟಪ ಇಪ್ಪಾರುಗಳನು ಮಾಡಿ
ಮಂಗಳ ವಸ್ತುಗಳಿಂದಲಿ ಆಗಾಗ
ಶೃಂಗಾರ ಮಾಡುತ ಸುಖಿಪರು ಜನರು

ಯಾವುದಾದರು ಒಂದು ಮನೆಯ
ತಾವು ತಾವೇ ನಿರ್ಮಿಸಿ ಅಲ್ಲಿ ಜನರು ವಾಸಿಪರು
ಸಾವು ಬಾಳು ಹುಟ್ಟು ಮದುವೆ ಮುಂಜಿಗಳೆಲ್ಲ
ನೀವು ಹೊಂದುವುದೆಲ್ಲ ಮಂದಿರದಲ್ಲೆ

ಮುಂಬಾಗಿಲೇ ಮುದ್ದು ಮುಖವು
ತುಂಬ ತುಂಬ ಬೆಳಕನು ಕೊಡುವ ಕಿಟಕಿಯೆ ಕಣ್ಣು
ಇಂಬಾದ ಅಡುಗೆಯ ಕೋಣೆಯೆ ಜಠರವು
ನಂಬಿ ದೇವರ ಭಜಿಪ ಕಿರುಮನೆಯೆ ಹೃದಯ

ಹೊಟ್ಟೆಯೊಳೆಲ್ಲರ ನಿಟ್ಟು
ಗುಟ್ಟ ರಟ್ಟು ಮಾಡದೆ ತಾಯ ತೆರದೊಳು ಸಲಹಿ
ಸಿಟ್ಟು ಸಿಡುಕಿಲ್ಲದೆ ಮಂದಿಯ ಸೇವಿಪ
ಶಿಷ್ಟಳಾಗಿಹ ಪೂಜ್ಯ ಗೃಹಲಕ್ಷ್ಮಿ ನಾನು

ದೊಡ್ಡಿ ಕೊಪ್ಪಲು ಹುಂಡಿ ಹಳ್ಳಿ
ದೊಡ್ಡ ದೊಡ್ಡ ಪಟ್ಟಣ ಪಾಳ್ಯ ಗ್ರಾಮಗಳೆಲ್ಲಾ
ದೊಡ್ಡದೊ ಸಣ್ಣದೊ ಮನೆಗಳ ಗುಂಪಲ್ತೆ
ಹೆಡ್ಡರು ಜಾಣರು ಇದ ಬಲ್ಲರಲ್ತೆ

# ಭಾರತಮಾತೆ

ವಂದಿಪೆ ಭಾರತಮಾತೆ ಸುಂದರ ಪಾವನ ಚರಿತೆ ॥ ಪ. ॥
ಬಂಧುಕೃಪಾರಸ ಭರಿತೆ ಎಂದಿಗೆ ಸುಖಿಸುವೆಯೊ
॥ ಅ. ಪ. ॥

ಹಿಮಗಿರಿಯೇ ಶಿರ ನಿನಗೆ ಡೆಲ್ಲಿಯೆ ಮಂಜುಳ
ಮುಖವು
ಕಾಶಿಯೆ ಭಾಸಿಪ ಹೃದಯ ಬೊಂಬಾಯೇ ಬಲಗೈ

ಎಡಗೈಯೇ ಕಲಕತ್ತೆ ನಡುವೇ ವಿಂಧ್ಯಾಚಲವು
ಪಡುವಣ ಪರ್ವತ ಬಲಗಾಲ್ ಎಡಗಾಲ್ ಪೂರ್ವಗಿರೀ

ಪಾದವು ಸಿಂಹಳದ ಬಳಿ ಖೇದವು ಮಾನಸದೊಳಗೆ
ಮೋದವನೀಂ ಹಾರಯಿಸು ಖೈದ ಸ್ಥಿರವಲ್ಲ

ಹೊಳೆಗಳೆ ಹಾರವು ನಿನಗೆ ಬೆಳೆಗಳೆ ಪೀತಾಂಬರವು
ಮಳೆಯೇ ದಿವ್ಯ ಸ್ನಾನ ಗಾಳಿಯೆ ನಿನ್ನುಸಿರು

ಹಿಂದು ಮಹಮ್ಮದ ಜನರೇ ಔರಸ ಜಾತರು ನಿನಗೆ
ಇಂದಿಗೆ ಮೂವತ್ತೈದು ಕೋಟ್ಯಂತರ ಜನರು

ಪುಣ್ಯ ಮಹಾಕ್ಷೇತ್ರಗಳು ಮಾನ್ಯ ಮಹಾ ಗ್ರಂಥಗಳು
ಗಣ್ಯ ಮಹಾಶಯ ಸುತರು ನಿನ್ನೊಳಗಿರುತಿದ್ದೂ

ಹೊಟ್ಟೆಗೆ ಊಟವು ಕಡಿಮೆ ಬಟ್ಟೆಯು ಸಾಲದು
ನಮಗೆ
ನೆಟ್ಟಗೆ ಜೀವಿಸಲಿಲ್ಲ ಥಟ್ಟನೆ ಸಾವಿಲ್ಲ

ಕನಸಿನೊಳೇ ಸ್ವಾತಂತ್ರ್ಯ ಮನಸಿನೊಳೇ ಮುಂಡಿಗೆಯು
ಧನಿಕತೆ ಸಾಮ್ರಾಜ್ಯಗಳು ಹಣೆಯಲಿ ಬರೆದಿಲ್ಲ

ನಿನ್ನ ಪ್ರಾಣದ ಸಾರ ಹೊನ್ನಿನ ಹೊಳೆಯೇ ಹರಿದು
ಅನ್ಯರ ದೇಶಕೆ ಸರಿದು ಶೂನ್ಯಳು ನೀನಾದೆ

ಹಾಳು ಪರಾಧೀನತೆಯೇ ಕೀಳರ ಮಾಡಿದೆ ನಮ್ಮ
ಗೋಳಿನ ಸಂಕಟವನ್ನು ಕೇಳುವರಾರಮ್ಮ

ಇಂಥಾ ಸಂಕಟದಲ್ಲೂ ನಮ್ಮೊಳು ನಾವ್ ಕಾದಾಡಿ
ಸುತರಾವೇ ನಿನ್ನನ್ನು ಸುಮ್ಮನೆ ನೋಯಿಪೆವು

ಇಬ್ಬರ ಜಗಳದ ಫಲವು ಲಾಭವು ಮೂರನೆಯವಗೆ
ನಿನ್ನ ಪರಾಧೀನತೆಗೆ ನಮ್ಮಪರಾಧವೆ ಮೂಲ।

ಇಂತಾದರು ದಮ್ಮಯ್ಯ ಚಿಂತಿಸ ಬೇಡಮ್ಮಯ್ಯ
ಸ್ವಾಂತದ ಚಿಂತೆಯ ನೀಗಿ ಶಾಂತಿಯನೆಸಗುವೆವು

ಒಗ್ಗಟ್ಟಿಂದಲೆ ನಾವು ಜಗ್ಗದೆ ಯಾರಿಗು ಮುಂದೆ
ಸ್ವರ್ಗಸುಖಂ ಪಡೆವಂತೆ ಹಿಗ್ಗುತ ಹರಸಮ್ಮ

ಹೇ ಕರುಣಾಕರ ದೇವ ಯಾಕೀ ಮಾತೆಯ ನೋಯಿಪೆ
ಲೋಕದ ಸೌಖ್ಯವನಿತ್ತು ಸಾಕು ಮಹಾಸ್ವಾಮಿ

# ಪರಮಾತ್ಮ

ನೀನೆಲ್ಲಿಹೆಯೊ ದೇವ ನಿನ್ನ ನಾನರಿತಿಲ್ಲ
ನಿನ್ನ ಮಹಿಮೆಯನೇನೊ ನಾ ನೋಡಬಲ್ಲೆ
ನೀನೊಬ್ಬನಿರುವೆಯೆಂದೂಹಿಪುದ ನಾ ಬಲ್ಲೆ
ನೀನೇ ಆ ಊಹಿಸುವ ಬುದ್ಧಿಯಿತ್ತವನು

ಸಣ್ಣ ವಟಬೀಜವನು ಘನ ವೃಕ್ಷವಾಗಿಸುವೆ
ಹಣ್ಣು ಹೂವನು ಕೊಡುವೆ ಮುಳ್ಳು ಗಿಡದಲ್ಲೂ
ಕಸವ ತಿನ್ನುವ ಪಶುವಿನಲ್ಲಿ ಹಾಲನು ಕೊಡುವೆ
ವಿಷದಿಂದ ಔಷಧಂಗಳನು ಮಾಡಿಸುವೆ

ಆಧಾರವಿಲ್ಲದೆಯೆ ಭೂಮಿಯನು ನಿಲ್ಲಿಸಿಹೆ
ಸ್ವಾದೂದಕವನಿಡುವೆ ನಾರಿಕೇಳದಲಿ
ಜಗದ ಬೆಳಕಿಗೆ ಸೂರ್ಯಚಂದ್ರಾಗ್ನಿಗಳ ಕೊಟ್ಟೆ
ಗಗನವನು ಮತ್ತೆ ಗಾಳಿಯನು ನೀಕೊಟ್ಟೆ

ಹಲ್ಲುಕೂರುಗಳ ಹುಲಿ ಸಿಂಹಗಳಿಗಿತ್ತೆ
ಹುಲ್ಲೆಗವ ತಪ್ಪಿಸಲು ಚಟುವಟಿಕೆ ಇತ್ತೆ
ಇದ್ದೆಡೆಯೊಳೇ ಇರುವ ಮರಗಿಡಗಳನು ಪೊರೆವೆ
ಎದ್ದೋಡದಂತೆ ಸಾಗರವ ನೀ ತಡೆವೆ

ಸರ್ವೋತ್ತಮದ ಬುದ್ಧಿಯನು ಕೊಟ್ಟು ಮಾನವರಿಗೆ
ಸರ್ವವನ್ನೂ ಇವನ ವಶಕೆ ಕೊಟ್ಟಿರುವೆ
ಕೀಳು ಮೇಲೂ ಜನನ ಮರಣ ಅರಿ ಮಿತ್ರತೆಯು
ಒಳಗು ಹೊರಗೂ ಕಷ್ಟ ಸೌಖ್ಯ ಭಯ ಧೈರ್ಯ

ಸಂಪತ್ತು ದಾರಿದ್ರ್ಯ ಆರೋಗ್ಯ ರೋಗಗಳು
ಸೌಂದರ್ಯ ವೈರೂಪ್ಯ ಆಪತ್ತು ಮೋದ
ನೆರಳು ಬಿಸಿಲೂ ಶೈತ್ಯ ತಾಪ ಪುಣ್ಯವು ಪಾಪ
ಎರಡು ಮಾರ್ಗದೊಳಿಂತು ಎಲ್ಲ ರಚಿಸಿರುವೆ

ನಿನ್ನ ಮಾದರಿಯನ್ನು ಅನುಸರಿಸಿ ನಾವುಗಳು
ದಣಿಯು ಸೇವಕ ರಾಜ ರಾಜ್ಯ ಮುಂತಾಗಿ

ಮನ್ನಿಸುತ ನಿನ್ನ ನಿಯಮಗಳನೆಚ್ಚರದಿಂದ
ಸಣ್ಣ ಯಂತ್ರಗಳ ಮನೆ ಕೆರೆಕಟ್ಟೆ ರಚಿಸಿ

ನೀನೆ ಗತಿ ನಮಗೆಂದು ನಿನ್ನನೇ ನೆರೆ ನಂಬಿ
ಇನ್ನೇನು ಬೇರೆ ಯೋಚನೆಯಿಲ್ಲದಿಹೆವು
ಎಷ್ಟು ಕರುಣವೊ ನಿನಗೆ ಮನುಜರಾದೆಮ್ಮೊಳಗೆ
ಎಷ್ಟು ಋಣಿಗಳೊ ನಾವು ನಿನಗೆ ಭಗವಂತ

ಇಷ್ಟೆಂದು ವರ್ಣಿಸಲು ನನಗೆಲ್ಲಿಹುದು ಶಕ್ತಿ
ಶಿಷ್ಟಾತ್ಮವಂದಿಪುದನೊಂದೆ ನಾ ಬಲ್ಲೆ
ನೀನಿಷ್ಟು ಕೊಟ್ಟರೂ ನಮಗೆ ಸುಖವೇನಿಲ್ಲ
ಏನು ಮಾಡಿದರು ಪಾಪವೊ ಪುಣ್ಯವೊ

ಹಾನಿವೃದ್ಧಿಗಳಿತ್ತು ನಮ್ಮ ನಡೆಸುವುದೆಂದು
ಶಾನೆ ಹೆದರಿಹೆವು ಇದು ನಿನ್ನ ಮಾಯೆ
ನೀನು ಸುಮ್ಮನೆ ಇರದೆ ಸರ್ವದಾ ಈ ವಿಧದಿ
ಜಾಣತನದಿಂ ಕಪಟ ಯುಕ್ತಿ ಮಾಡುತ್ತ

ಮಾನವರನೆಲ್ಲ ಸೂತ್ರದ ಬೊಂಬೆಯಂತೆಯೇ
ಏನು ಕಾರಣದಿಂದ ಕುಣಿಸುತ್ತಲಿಹೆಯೊ
ನರಿಯಂತೆ ನಾನಲ್ಪನಾದರೂ ನನ್ನ ಮೊರೆ
ಭರದಿಂದ ನಿನಗೆ ಸೇರುವುದೇನೊ ದಿಟವು

ಅರಿತೊ ಅರಿಯದೆಯೊ ನಾ ಮಾಡಿದಪರಾಧಗಳ
ಮರೆತು ರಕ್ಷಿಸಬೇಕು ಜಗದೀಶ ನೀನು
ಕರುಣಾಕರನೆ ನೀನೆ ನನ್ನ ಕಡೆಗಣಿಸಿದರೆ
ಪೊರೆವರಿನ್ನಾರಯ್ಯ ನಿನ್ನ ದಮ್ಮಯ್ಯ

PRINTED AT
THE PHŒNIX PRINTING HOUSE, BANGALORE CITY

